

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 771
ಸದಸ್ಯರ ಹೆಸರು : ಶ್ರೀ ಗೋವಿಂದರಾಜು . ಕೆ
ಉತ್ತರಿಸುವ ದಿನಾಂಕ : 15/12/2020
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕೋಲಾರ ನಗರಸಭೆಯ ವ್ಯಾಪ್ತಿಯ ರಸ್ತೆಗಳ ಗಡಿಯನ್ನು ಗುರುತಿಸಲಾಗಿದೆಯೇ? | ಅಧಿಸೂಚನೆ ಸಂಖ್ಯೆ: ವನಇ/464/ಎಂಎಲ್ಆರ್/95, ದಿನಾಂಕ 12/10/1995, ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆ, ದಿನಾಂಕ 26/10/1995 ರಲ್ಲಿ ಅಧಿಸೂಚಿಸಿರುವಂತೆ ಕೋಲಾರ ನಗರಸಭೆ ವ್ಯಾಪ್ತಿಗೆ ಬರುವ ಪ್ರದೇಶಗಳ/ರಸ್ತೆಗಳ ಗಡಿಯನ್ನು ಗುರುತಿಸಲಾಗಿದೆ. |
| ಆ) | ಈ ರಸ್ತೆಗಳ ಗಡಿಯನ್ನು ಗುರುತಿಸುವಾಗ ಸರ್ಕಾರ ಅನುಸರಿಸಿರುವ ಮಾನದಂಡಗಳೇನು? ಈ ರಸ್ತೆಗಳ ಗಡಿಯನ್ನು ಯಾವ ವೈಜ್ಞಾನಿಕ ಆಧಾರದ ಮೇಲೆ ಗುರುತಿಸಲಾಗಿದೆ. | ನಗರಸಭೆಯ ಗಡಿಯನ್ನು ಗುರುತಿಸುವಾಗ ಅಧಿಸೂಚನೆ ಸಂಖ್ಯೆ:ವನಇ/464/ಎಂಎಲ್ಆರ್/95, ದಿನಾಂಕ 27/08/1995 ರಲ್ಲಿ ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ-4 ಸೆಕ್ಷನ್ 2 ಸಿ (ii) ಯಲ್ಲಿ ಪ್ರಕಟಿಸಿ, ಸಾರ್ವಜನಿಕರಿಂದ/ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಸಲಹೆ / ಆಕ್ಷೇಪಣೆಗಳನ್ನು ಆಹ್ವಾನಿಸಿ 30 ದಿನಗಳ ಅವಧಿ ಮುಗಿದ ನಂತರ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲದಿರುವುದರಿಂದ ದಿನಾಂಕ 12/10/1995ರ ಅಧಿಸೂಚನೆಯಲ್ಲಿ ಅಂತಿಮಗೊಳಿಸಲಾಗಿದೆ. |
| ಇ) | ಈ ರಸ್ತೆಗಳ ಗಡಿಯನ್ನು ಜನಪ್ರತಿನಿಧಿಗಳ ಗಮನಕ್ಕೆ ತರಲಾಗಿದೆಯೇ. | ನಗರಸಭೆ ಗಡಿಯನ್ನು ಗುರುತಿಸಿದ ಅಧಿಸೂಚನೆಯನ್ನು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಸಾರ್ವಜನಿಕರಿಗೆ/ಬಾಧಿತರಾಗಬಹುದಾದ ಎಲ್ಲರ ಗಮನಕ್ಕೆ ತರಲಾಗಿದೆ.<br>ಕರ್ನಾಟಕ ಪುರಸಭೆಗಳ ಅಧಿನಿಯಮ 1964 ರ ಕಲಂ 3 ಮತ್ತು 9 ರನ್ವಯ ಕ್ರಮವಹಿಸಲಾಗಿದೆ. |
| ಈ) | ಹಾಗಿಲ್ಲದಿದ್ದಲ್ಲಿ ಜನಪ್ರತಿನಿಧಿಗಳ ಹಾಗೂ ಜನಸಾಮಾನ್ಯರ ಗಮನಕ್ಕೆ ತರದಿರಲು ಕಾರಣಗಳೇನು. | ಕರ್ನಾಟಕ ರಾಜ್ಯ ವಿಶೇಷ ಪತ್ರದಲ್ಲಿ ದಿನಾಂಕ 12/10/1995 ರಲ್ಲಿ ಪ್ರಕಟಿಸಲಾಗಿದೆ. |

ಸಂಖ್ಯೆ: ನಅಇ/ 106 /ಜಿಇಎಲ್/2020

**(ನಾರಾಯಣ ಗೌಡ)**
ಪೌರಾಡಳಿತ, ತೋಟಗಾರಿಕೆ
ಹಾಗೂ ರೇಷ್ಮೆ ಸಚಿವರು